ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೦೩
ಸಂಚಿಕೆ : ೧೦-೧೧ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಏಪ್ರಿಲ್ - ಸೆಪ್ಟೆಂಬರ್ ೨೦೦೯

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



ಪರಿವಿಡಿ

೧. ಪ್ರೊ. ಎಂ.ವಿ.ಸೀ. ಜನ್ಮಶತಮಾನೋತ್ಸವ / ೧
೨. ಸಂಪಾದಕೀಯ / ೨
೩. ಸರ್ವಸದಸ್ಯರ ಸಭೆಯ ಕಾರ್ಯಸೂಚಿ / ೩
೪. ಪ್ರತಿಷ್ಠಾನದ ವಾರ್ತೆ / ೪
೫. ಪುಸ್ತಕ ಪರಿಚಯ / ೬
೬. ಅಭಿನಂದನೆಗಳು / ೭
೭. ಶ್ರದ್ಧಾಂಜಲಿ / ೮
೮. ದಾನಿಗಳು / ೮

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭/೨೬೬೭೬೭೭೩
ಇಮೇಲ್: bmsritrust@gmail.com
ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥. ಮಂಡ್ಯ ಜಿಲ್ಲೆ

## ಪ್ರೊ. ಎಂ.ವಿ.ಸೀತಾರಾಮಯ್ಯ ಅವರ ಜನ್ಮಶತಮಾನೋತ್ಸವ ಆಚರಣೆಯ ಪ್ರಾರಂಭೋತ್ಸವ



ದಿನಾಂಕ: ೦೯-೦೯-೨೦೦೯ರಂದು ಗುರುವಾರ ಪ್ರೊ.ಎಂ.ವಿ.ಸೀ. ಅವರ ಜನ್ಮಶತಮಾನೋತ್ಸವದ ಉದ್ಘಾಟನಾ ಸಮಾರಂಭ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಅದ್ದೂರಿಯಾಗಿ ಜರುಗಿತು. ಸನ್ಮಾನ್ಯ ಪದ್ಮಶ್ರೀ ನಾಡೋಜ ಡಾ. ದೇ. ಜವರೇಗೌಡರು ಕಾರ್ಯಕ್ರಮ ಉದ್ಘಾಟಿಸಿದರು. ನಗರಾಭಿವೃದ್ಧಿ ಸಚಿವ ಶ್ರೀ ಸುರೇಶ್‌ಕುಮಾರ್ ಅನಿವಾರ್ಯ ಕಾರಣಗಳಿಂದ ಸಭೆಗೆ ಆಗಮಿಸಲು ಸಾಧ್ಯವಾಗದ್ದರಿಂದ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅಧ್ಯಕ್ಷತೆ ವಹಿಸಿದ್ದರು. ವೇದಿಕೆ ಕಾರ್ಯಕ್ರಮಗಳು ಪ್ರಾರಂಭವಾಗುವ ಮುನ್ನ ಎಂ.ವಿ.ಸೀ. ಅವರ ಗೀತೆಗಳ ಗಾಯನವನ್ನು ಶ್ರೀ ಆನಂದ ಮಾದಲಗೆರೆ ತಂಡದವರು ನಡೆಸಿಕೊಟ್ಟರು. ಪ್ರಾರ್ಥನೆ ಹಾಗೂ ನಾಡಗೀತೆಯನ್ನೂ ಶ್ರೀ ಆನಂದ ಮಾದಲಗೆರೆ ಹಾಡಿದರು. 'ಬೆಳಕು ಶಿಶು ನಿವಾಸ'ದ ಮಕ್ಕಳು ಎಂ.ವಿ.ಸೀ. ಅವರ 'ಹೂವನು ಮಾರುತ ಹೂವಾಡಗಿತ್ತಿ' ಕವನವನ್ನು ಸುಶ್ರಾವ್ಯವಾಗಿ ಹಾಡಿದರು. ನಾಡೋಜ ಜಿ. ನಾರಾಯಣ ಅವರು ಅತಿಥಿ ಅಭ್ಯಾಗತರನ್ನೂ; ಸ್ವಾಗತಿಸಿದರು. ಎಂ.ವಿ.ಸೀ. ಶತಮಾನೋತ್ಸವ ಸಮಿತಿಯ ಕಾರ್ಯಾಧ್ಯಕ್ಷ ಡಾ. ಪಿ.ವಿ. ನಾರಾಯಣ ಅವರು ಪ್ರಾಸ್ತಾವಿಕ ಭಾಷಣ ಮಾಡಿ ಪ್ರೊ ಎಂ.ವಿ.ಸೀ. ಅವರ ಸಾಹಿತ್ಯ ಕೊಡುಗೆಗಳ ಮೇಲೆ ಬೆಳಕು ಚೆಲ್ಲಿ ಪ್ರತಿಷ್ಠಾನ ಹಮ್ಮಿಕೊಂಡಿರುವ ರಾಜ್ಯಾದಂತ ನಡೆಸಬೇಕೆಂದಿರುವ ಕಾರ್ಯಕ್ರಮಗಳ ವಿವರ ನೀಡಿ, ಉದ್ದಾಮ ಸಾಹಿತಿ, ಸಂಶೋಧಕ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಸ್ಥಾಪಕ ಪ್ರೊ.ಎಂ.ವಿ.ಸೀ. ರವರ ಶತಮಾನೋತ್ಸವ ಕಾರ್ಯಕ್ರಮಗಳ

(ಪುಟ ೫ ನೋಡಿ)



# ಸಂಪಾದಕೀಯ...............

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಸ್ಥಾಪಕರಾದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಜನ್ಮ ಶತಮಾನೋತ್ಸವವನ್ನು ದಿ. ೦೯-೦೯-೨೦೦೯ ರಿಂದ ೦೯-೦೯-೨೦೧೦ರವರೆಗೆ ವೈವಿಧ್ಯಮಯ ಕಾರ್ಯಕ್ರಮಗಳನ್ನು ರೂಪಿಸಿ ರಾಜ್ಯಾದಂತ ಹಬ್ಬದಂತೆ ಕಾರ್ಯಗತಗೊಳಿಸಲು ನೆರವಾಗಲು ಹಿರಿಯ ಸಾಹಿತಿಗಳು, ಎಂ.ವಿ.ಸೀ. ಅವರ ನಿಕಟವರ್ತಿಗಳು, ಅಭಿಮಾನಿಗಳು ಸೇರಿದಂತೆ ಶತಮಾನೋತ್ಸವ ಉತ್ಸವ ಸಮಿತಿ ರಚಿಸಲಾಗಿದೆ. ಇದರಲ್ಲಿ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಗೌರವ ಅಧ್ಯಕ್ಷರಾಗಿ, ನಾಡೋಜ ಡಾ. ಜಿ. ನಾರಾಯಣ ಅಧ್ಯಕ್ಷರಾಗಿ, ಪ್ರೊ. ಎಲ್.ಎಸ್. ಶೇಷಗಿರಿರಾವ್, ಡಾ. ಎಂ. ಚಿದಾನಂದಮೂರ್ತಿ, ಪ್ರೊ. ಅ.ರ.ಮಿತ್ರ, ಪ್ರೊ.ಎಂ.ಎಚ್.ಕೃಷ್ಣಯ್ಯ, ಉಪಾಧ್ಯಕ್ಷರುಗಳಾಗಿ, ಡಾ. ಪಿ.ವಿ. ನಾರಾಯಣ, ಕಾರ್ಯಾಧ್ಯಕ್ಷರಾಗಿ, ಡಾ.ನಾ. ಗೀತಾಚಾರ್ಯ, ಶ್ರೀ ಎಸ್. ವಿ. ಶ್ರೀನಿವಾಸರಾವ್, ಶ್ರೀ ಎಂ.ಎಸ್.ಭಾಸ್ಕರ್ ಕಾರ್ಯದರ್ಶಿಗಳಾಗಿ, ಶ್ರೀ ಎಸ್.ಟಿ.ರಾಧಾಕೃಷ್ಣ ಖಜಾಂಚಿಯಾಗಿ ಕಾರ್ಯ ನಿರ್ವಹಿಸಲಿದ್ದಾರೆ. ಈ ಸಮಿತಿಯ ಸಲಹೆಮೇರೆಗೆ ರಾಜ್ಯಾದಂತಾ ಕಾರ್ಯಕ್ರಮಗಳನ್ನು ನಡೆಸಿಕೊಡಲು ಕನ್ನಡ ಸಾಹಿತ್ಯ ಪರಿಷತ್ತು, ಜಿಲ್ಲಾ ಘಟಕಗಳು, ಶಾಲಾ-ಕಾಲೇಜು, ಸಾಹಿತ್ಯಿಕ/ಸಾಂಸ್ಕೃತಿಕ ಸಂಸ್ಥೆಗಳನ್ನು, ಸಂಪರ್ಕಿಸಲಾಗಿದೆ. ೦೯-೦೯-೨೦೦೯ರಂದು ರವೀಂದ್ರ ಕಲಾಕ್ಷೇತ್ರದಲ್ಲಿ ಈ ಶತಮಾನೋತ್ಸವ ಕಾರ್ಯಕ್ರಮಗಳ ಉದ್ಘಾಟನೆಯನ್ನು ನೃಪತುಂಗ ಪ್ರಶಸ್ತಿ ಪುರಸ್ಕೃತ ನಾಡೋಜ ಡಾ. ದೇ. ಜವರೇಗೌಡರು ನಡೆಸಲಿದ್ದಾರೆ. ನಗರಾಭಿವೃದ್ಧಿ ಸಚಿವ ಶ್ರೀ ಸುರೇಶ್ ಕುಮಾರ್ ಈ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಲಿದ್ದಾರೆ. ಈ ಸಮಾರಂಭಕ್ಕಾಗಿಯೇ ವಿಶೇಷವಾಗಿ ಡಾ. ನಾ. ಗೀತಾಚಾರ್ಯ ರಚಿಸಿರುವ 'ಹಸ್ತಪ್ರತಿ ಅಧ್ಯಯನಶಾಸ್ತ್ರ' ಮತ್ತು ಎಸ್.ವಿ. ಶ್ರೀನಿವಾಸರಾವ್ ರಚಿಸಿರುವ 'ಎಂ.ವಿ.ಸೀ. ಕಿರುಪರಿಚಯ-ನುಡಿ ಮುತ್ತುಗಳು' ಗ್ರಂಥಗಳನ್ನು ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀಗಳು ಲೋಕಾರ್ಪಣೆಗೊಳಿಸಲಿದ್ದಾರೆ. ಇದೇ ಸಂದರ್ಭದಲ್ಲಿ ಎಂ.ವಿ.ಸೀ. ರಚಿಸಿರುವ ಗೀತೆ/ಕವನಗಳ ಗಾಯನ, ಮಕ್ಕಳ ನಾಟಕ ಪ್ರದರ್ಶನ ಕಾರ್ಯಕ್ರಮಗಳು ನಡೆಯಲಿವೆ ಅವರೆಲ್ಲರ ಕೃತಿಗಳು ಹಾಗೂ ಅವರು ರಚಿಸಿರುವ ಚಿತ್ರಗಳ ಪ್ರದರ್ಶನ ಸಹ ಏರ್ಪಡಿಸಲಾಗುತ್ತದೆ. ಈ ಶತಮಾನೋತ್ಸವ ವರ್ಷದಲ್ಲಿ ಎಂ.ವಿ.ಸೀ. ಅವರ ಸಮಗ್ರ ಗ್ರಂಥಗಳ ಸುಮಾರು ಹತ್ತು ಸಂಪುಟಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವತಿಯಿಂದ ಪ್ರಕಟಗೊಳ್ಳಲಿವೆ. ವರ್ಷಾದ್ಯಂತಾ ನಡೆಸುವ ಈ ಕಾರ್ಯಗಳಿಗೆ ಸುಮಾರು ೩೫ಲಕ್ಷ ಖರ್ಚಾಗುವುದೆಂದು ಅಂದಾಜು ಮಾಡಲಾಗಿದೆ. ಈ ಎಲ್ಲಾ ಕಾರ್ಯಚಟುವಟಿಕೆಗಳಿಗೆ ನೆರವಾಗುತ್ತಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ಅಭಿನಂದಿಸುತ್ತಿದ್ದೇವೆ. ಹೊರ ಜಿಲ್ಲೆಗಳಲ್ಲಿ ನಡೆಯುವ ಕಾರ್ಯಕ್ರಮಗಳನ್ನು ನಡೆಸಿಕೊಡಲು ಹಲವು ಸಾಹಿತಿಗಳು ಮತ್ತು ಸಂಸ್ಥೆಗಳು ಮುಂದಾಗಿರುವುದು ಬಹು ಸಂತಸದ ಸಂಗತಿ. ಇದು ಎಂ.ವಿ.ಸೀ. ಅವರ ಬಗ್ಗೆ ಜನರಲ್ಲಿರುವ ಗೌರವ/ಅಭಿಮಾನಕ್ಕೆ ಜ್ವಲಂತ ನಿದರ್ಶನವಾಗಿದೆ.

ದೇಶದಲ್ಲಿ, ವಿದೇಶಗಳಲ್ಲಿ ಹರಡಿ ಹಂಚಿ ಹೋಗಿರುವ ಅವರ ಶಿಷ್ಯವರ್ಗ, ಅಭಿಮಾನಿವರ್ಗ ಈ ಎಲ್ಲ ಕಾರ್ಯಕ್ರಮಗಳೂ ಸುಗಮವಾಗಿ ನಡೆಸಿಕೊಡಲು ಆರ್ಥಿಕ ಸಹಾಯ ಮಾಡಬೇಕಾಗಿ ವಿನಂತಿಸಿಕೊಳ್ಳುತ್ತಿದ್ದೇವೆ. ಈ ಮಹತ್ತರ ಕಾರ್ಯಕ್ಕೆ ದೇಣಿಗೆ ನೀಡುವವರಿಗೆ ಆದಾಯ ತೆರಿಗೆ ವಿನಾಯಿತಿ ಇರುತ್ತದೆ. ರಾಜ್ಯಾದಂತಾ ಇರುವ ಮೈಸೂರು ಬ್ಯಾಂಕಿನ ನಮ್ಮ ಖಾತೆ ನಂ. ೫೪೦೧೫೨೯೪೨೯ ನಗದು, ಡಿಡಿ/ಚೆಕ್ ಮೂಲಕ ಸಂದಾಯ ಮಾಡಬಹುದಾಗಿರುತ್ತದೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣವನ್ನು ಶಬ್ದ ನಿಯಂತ್ರಣ ವ್ಯವಸ್ಥೆ ಅಳವಡಿಸಲು ೩ ತಿಂಗಳಿಂದ ಪ್ರಥಮಹಂತದ ಕಾಮಗಾರಿ ಕೆಲಸ ನಡೆಯುತ್ತಿದ್ದುದರಿಂದ ಪ್ರತಿಷ್ಠಾನದ ದತ್ತಿ ಹಾಗೂ ಇತರ ಸಾಹಿತ್ಯಿಕ / ಸಾಂಸ್ಕೃತಿಕ ಮಾಮೂಲು ಚಟುವಟಿಕೆಗಳನ್ನು ನಡೆಸಲು ಸಾಧ್ಯವಾಗಲಿಲ್ಲ ಎಂಬುದನ್ನು ಮಾನ್ಯಸದಸ್ಯರುಗಳ ಗಮನಕ್ಕೆ ತರಬಯಸುತ್ತೇವೆ. ಇದರಿಂದಾಗಿಯೇ ನಮ್ಮ ಕಾರ್ಯಕ್ರಮಗಳು ಕುಂಠಿತಗೊಂಡಿವೆ. ಇನ್ನು ಮುಂದೆ ಕಾರ್ಯಕ್ರಮಗಳು ಮಾಮೂಲಿನಂತೆ ನಡೆಯುತ್ತವೆ ಎಂದು ಮಾನ್ಯ ಸದಸ್ಯರಲ್ಲಿ ಮನವಿಮಾಡಿಕೊಳ್ಳುತ್ತಿದ್ದೇವೆ.

ನಾವು ಈ ಶತಮಾನೋತ್ಸವ ವರ್ಷದಲ್ಲಿ ನಡೆಸಲಿರುವ ನಮ್ಮೆಲ್ಲ ಚಟುವಟಿಕೆಗಳಿಗೂ ಅಭಿಮಾನಿವರ್ಗ ವಿಶ್ವಾಸಪೂರ್ವಕವಾಗಿ ಧಾರಾಳವಾಗಿ ಸ್ಪಂದಿಸಿ ಧಾರಾಳವಾಗಿ ಧನಸಹಾಯ ಮಾಡಿ ಯಶಸ್ವಿಗೊಳಿಸಬೇಕೆಂದು ಕೋರುತ್ತಿದ್ದೇವೆ.

ಎಸ್.ವಿ. ಶ್ರೀನಿವಾಸರಾವ್
ಸಂಪಾದಕರು

**ಸರ್ವಸದಸ್ಯರ ಸಭೆ :** ದಿನಾಂಕ ಆಗಸ್ಟ್ ೩೦, ೨೦೦೯ ರಂದು ನಡೆದ ಕಾರ್ಯಕಾರಿ ಸಮಿತಿಯು ೩೦ನೇ ಸರ್ವಸದಸ್ಯರ ಸಭೆಯನ್ನು ಸೆಪ್ಟೆಂಬರ್ ೨೭, ೨೦೦೯ರಂದು ನಡೆಸಲು ತೀರ್ಮಾನಿಸಿ ಕಾರ್ಯಸೂಚಿಯನ್ನು ಸರ್ವಸದಸ್ಯರ ಗಮನಕ್ಕೆ ಶೀಘ್ರವೇ ತರಬೇಕೆಂದು ತೀರ್ಮಾನಿಸಿತು. ಅದರಂತೆ ಕೆಳಕಂಡ ಕಾರ್ಯಸೂಚಿಯನ್ನು ಸರ್ವಸದಸ್ಯರ ಗಮನಕ್ಕೆ ತರಲಾಗುತ್ತಿದೆ.



# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ).

## ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

## ಬಿ.ಎಂ.ಶ್ರೀ. ಕಲಾಭವನ

3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – 560 019.

ದಿನಾಂಕ: ೪-೯-೨೦೦೯

ಮಾನ್ಯರೇ,

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮುವತ್ತನೆಯ ಸರ್ವಸದಸ್ಯರ ಸಭೆಯ ದಿನಾಂಕ: ೨೭-೦೯-೨೦೦೯ನೇ ಭಾನುವಾರ ಸಂಜೆ ೫–೩೦ಕ್ಕೆ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಗೌರವಾಧ್ಯಕ್ಷರಾದ ನಾಡೋಜ ಜಿ. ನಾರಾಯಣ ಅವರ ಉಪಸ್ಥಿತಿಯಲ್ಲಿ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲು ತೀರ್ಮಾನವಾಗಿದೆ. ತಾವು ದಯವಿಟ್ಟು ಸಕಾಲಕ್ಕೆ ಆಗಮಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕಗಿ ವಿನಂತಿ.

## ಕಾರ್ಯಸೂಚಿ

೧. ಪ್ರಾರ್ಥನೆ, ಸ್ವಾಗತ ಮತ್ತು ಅಗಲಿದ ಸದಸ್ಯರಿಗೆ ಸಂತಾಪ.
೨. ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಸ್ಥಿರೀಕರಿಸುವುದು.
೩. ೨೦೦೮-೦೯ನೇ ಸಾಲಿನ ಆಡಳಿತ ವರದಿಯನ್ನು ಅಂಗೀಕರಿಸುವುದು.
೪. ೨೦೦೮-೦೯ನೇ ಸಾಲಿನ ಲೆಕ್ಕಪರಿಶೋಧಕರು ನೀಡಿರುವ ಆಯವ್ಯಯ ಲೆಕ್ಕ ವಿವರಗಳನ್ನು ಅನುಮೋದಿಸುವುದು.
೫. ೨೦೦೯-೧೦ನೇ ಸಾಲಿನ ಅಂದಾಜು ಆಯ-ವ್ಯಯ ಪಟ್ಟಿಯನ್ನು ಅನುಮೋದಿಸುವುದು.
೬. ೨೦೦೯-೧೦ನೇ ಸಾಲಿಗೆ ಲೆಕ್ಕ ಪರಿಶೋಧಕರ ನೇಮಕ.
೭. ನಿಯಮಾನುಸಾರ ನಿವೃತ್ತರಾಗಲಿರುವ ಕಾರ್ಯಸಮಿತಿ ಸದಸ್ಯರ ಚುನಾವಣೆ.
೮. ಸದಸ್ಯರು ಕಳುಹಿಸಿರುವ ಸಲಹೆ ಸೂಚನೆಗಳು.
೯. ಇತರೆ ವಿಚಾರಗಳು (ಅಧ್ಯಕ್ಷರ ಒಪ್ಪಿಗೆಯಿಂದ).
೧೦. ಅಧ್ಯಕ್ಷರ ಭಾಷಣ, ವಂದನಾರ್ಪಣೆ

## ಕಾರ್ಯಸಮಿತಿಯ ಅಪ್ಪಣೆಯ ಮೇರೆಗೆ

| ಎಸ್.ಟಿ. ರಾಧಾಕೃಷ್ಣ | ಎಸ್.ವಿ.ಶ್ರೀನಿವಾಸರಾವ್ | ಡಾ॥ ನಾ. ಗೀತಾಚಾರ್ಯ |
|---|---|---|
| ಗೌರವ ಕೋಶಾಧಿಕಾರಿ | ವ್ಯವಸ್ಥಾಪಕ ಕಾರ್ಯದರ್ಶಿ | ಗೌರವ ಕಾರ್ಯದರ್ಶಿ |

## ವಿಶೇಷ ಸೂಚನೆ

೧. ಸದಸ್ಯತ್ವ ಬಾಕಿ ಇರುವವರು ಅವಧಿ ಮುಗಿದ ತಿಂಗಳೊಳಗೆ ಪಾವತಿ ಮಾಡಿರಬೇಕು.
೨. ಅಗತ್ಯ ಸಂಖ್ಯೆ 'ಕೋರಂ' ಇಲ್ಲದಿದ್ದಲ್ಲಿ ಸಭೆಯು ಅರ್ಧ ಗಂಟೆ ನಂತರ ಆರಂಭವಾಗುತ್ತದೆ.
೩. ಸದಸ್ಯರು ಕಳುಹಿಸಿದ ಸಲಹೆ ಸೂಚನೆಗಳು ಒಂದು ವಾರಕ್ಕೆ ಮುಂಚೆ ತಲುಪಬೇಕು.
೪. ಸಂಜೆ ೪.೩೦ ಗಂಟೆಗೆ ಉಪಹಾರವಿರುತ್ತದೆ.
೫. ಎಂ.ವಿ.ಸೀ. ಶತಮಾನೋತ್ಸವ ಕಾರ್ಯಕ್ರಮಗಳ ಉದ್ಘಾಟನಾ ಸಮಾರಂಭದ ವ್ಯವಸ್ಥೆಯಲ್ಲಿ ತೊಡಗಿದ್ದುದರಿಂದ ವಾರ್ಷಿಕ ವರದಿಯನ್ನು ಇದರೊಡನೆ ಕಳುಹಿಸಲಾಗಿಲ್ಲ. ಸಭೆಯ ದಿನ ಮಾನ್ಯ ಸದಸ್ಯರು ಅದನ್ನು ಮುಂಚಿತವಾಗಿ ಪಡೆಯಬಹುದು.

# ಪ್ರತಿಷ್ಠಾನದ ವಾರ್ತೆ

**'ಸಂಶೋಧನ ಕಮ್ಮಟ'**

**(೧೪-೦೪-೨೦೦೯ ರಿಂದ ೧೯-೦೪-೨೦೦೯ರವರೆಗೆ) :**

ಆರು ದಿನಗಳ ಈ ಸಂಶೋಧನಾ ಕಮ್ಮಟದಲ್ಲಿ ಆಸಕ್ತ ಶಿಬಿರಾರ್ಥಿಗಳು ಭಾಗವಹಿಸಿದ್ದರು. ದಿನಾಂಕ: ೧೪-೦೪-೨೦೦೯ರಂದು ಸಂಜೆ ೪-೦೦ ಗಂಟೆಗೆ ಉದ್ಘಾಟನಾ ಸಮಾರಂಭ ನಡೆಯಿತು. ಡಾ. ಗಾಯತ್ರಿ ನಾವಡ (ಸಿಂಡಿಕೇಟ್ ಸದಸ್ಯರು, ಕ.ವಿ.ವಿ) ಅವರು ಉದ್ಘಾಟಿಸಿದರು. ಮುಖ್ಯ



೧೪-೦೪-೨೦೦೯ 'ಸಂಶೋಧನ ಕಮ್ಮಟ' ಉದ್ಘಾಟನಾ ಸಮಾರಂಭ

ಅತಿಥಿಗಳಾಗಿ ನಿಯೋಜಿತ ಸಂಸ್ಕೃತ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಿ ಪ್ರೊ ಮಲ್ಲೇಪುರಂ ಜಿ. ವೆಂಕಟೇಶ್ ಆಗಮಿಸಿದ್ದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಈ ಆರು ದಿನ ನಡೆದ ಕಮ್ಮಟದಲ್ಲಿ ಡಾ. ಎ.ವಿ. ನಾವಡ, ಡಾ.ಕೆ.ಪಿ. ಭಟ್, ಶ್ರೀ ನರಸಿಂಹ ಮೂರ್ತಿ(ಗಣಕ ಪರಿಷತ್ತು) ಅತಿಥಿಗಳಾಗಿ ಆಗಮಿಸಿ ಪ್ರಬಂಧ ಮಂಡಿಸಿದರು. ಈ ಕಮ್ಮಟಕ್ಕೆ ಪ್ರೊ. ಡಿ. ಲಿಂಗಯ್ಯ, ಡಾ. ಅನಂತ ಪದ್ಮನಾಭರಾವ್, ಪ್ರೊ. ಜಿ. ಅಶ್ವತ್ಥನಾರಾಯಣ; ಪ್ರೊ.ಕೆ.ಎಸ್. ಮಧುಸೂದನ್, ಡಾ. ವಿಜಯ ಸುಬ್ಬರಾಜ್ ಮಾರ್ಗದರ್ಶಕರಾಗಿದ್ದರು. ದಿನಾಂಕ; ೧೯-೦೪-೨೦೦೯ ಭಾನುವಾರ ಸಂಜೆ ೩-೦೦ ಗಂಟೆಗೆ ನಡೆದ ಸಮಾರೋಪ ಸಮಾರಂಭದಲ್ಲಿ ಡಾ. ಶ್ರೀನಿವಾಸಹಾವನೂರ್ ಸಮಾರೋಪಭಾಷಣ ಮಾಡಿ ಅವರೇ ಅರ್ಹತಾ ಪತ್ರ ವಿತರಿಸಿದರು. ಡಾ. ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಕಮ್ಮಟದ ಪ್ರಾರಂಭದಲ್ಲಿ 'ಡಾ. ನಾ. ಗೀತಾಚಾರ್ಯ ಪ್ರಾಸ್ತಾವಿಕವಾಗಿ ಕಮ್ಮಟದ ರೂಪರೇಷೆಗಳನ್ನು ತಿಳಿಸಿ ಕಮ್ಮಟದ ಪ್ರಾಧಾನ್ಯತೆಯನ್ನು ನಿರೂಪಿಸಿದರು, ಸಮಾರೋಪ ಕಾರ್ಯಕ್ರಮದಲ್ಲಿ ಶ್ರೀವಾದಿರಾಜ್ ವಂದನಾರ್ಪಣೆ ಮಾಡಿದರು. ವಿದ್ಯಾರ್ಥಿಗಳಾದ ಶ್ರೀ ರವೀಂಧ್ರನಾಥ್ ಮತ್ತು ಶ್ರೀಮತಿ ರೂಪಾ ಬಿ.ಎಸ್. ತಾವು ತಯಾರಿಸಿರುವ ಟಿಪ್ಪಣಿ ಮಂಡಿಸಿದರು.



೨೬-೦೬-೨೦೦೯ರಂದು ಸನ್ಮಾನ್ಯಶ್ರೀ 'ಮುಖ್ಯಮಂತ್ರಿ ಚಂದ್ರು' ಅವರು ಪ್ರತಿಷ್ಠಾನಕ್ಕೆ ಭೇಟಿ ನೀಡಿ ಹಸ್ತಪ್ರತಿ ಸಂಗ್ರಹಾಲಯ ವೀಕ್ಷಿಸುತ್ತಿರುವುದು ಗ್ರಂಥಾಲಯಕ್ಕೆ ಪುಸ್ತಕ ಕಪಾಟುಗಳನ್ನುಕೊಳ್ಳಲು ಐದು ಲಕ್ಷ ರೂಪಾಯಿ ದೇಣಿಗೆ ನೀಡುವುದಾಗಿ ಘೋಷಿಸಿದರು.

**ದಿನಾಂಕ: ೨೬-೦೬-೨೦೦೯ರ ಸಂಜೆ ೪-೦೦ :** ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಮುಖ್ಯಮಂತ್ರಿ ಚಂದ್ರು ಪ್ರತಿಷ್ಠಾನಕ್ಕೆ ಭೇಟಿ ನೀಡಿದಾಗ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರು ಕಾರ್ಯಕಾರಿ ಸಮಿತಿಯ ಸದಸ್ಯರೆಲ್ಲರ ಪರಿಚಯ ಮಾಡಿಕೊಟ್ಟರು. ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಅತಿಥಿಗಳನ್ನು ಸ್ವಾಗತಿಸಿದರು. ಡಾ.ಪಿ.ವಿ. ನಾರಾಯಣ ಪ್ರತಿಷ್ಠಾನದ ಕಾರ್ಯಚಟುವಟಿಕೆಗಳ ಪೂರ್ಣ ಪರಿಚಯವನ್ನು ಮಾಡಿಸಿ, ಎಂ.ವಿ. ಸೀತಾರಾಮಯ್ಯ ಅವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಹಮ್ಮಿಕೊಂಡಿರುವ ಕಾರ್ಯಯೋಜನೆಗಳನ್ನು ನಿರೂಪಿಸಿ ಪ್ರತಿಷ್ಠಾನದ ಗ್ರಂಥಭಂಡಾರ, ಸಭಾಂಗಣ, ಹಸ್ತಪ್ರತಿ ಸಂಗ್ರಹಾಲಯಗಳನ್ನು ಆಧುನಿಕವಾಗಿ / ವೈಜ್ಞಾನಿಕ ರೀತಿಯಲ್ಲಿ ಶೀಘ್ರವೇ ಸಜ್ಜುಗೊಳಿಸಲು ಇರುವ ಅಗತ್ಯವನ್ನು, ವಿವರಿಸಿ ಸರಕಾರದಿಂದ ಹೆಚ್ಚಿನ ಸಹಾಯಧನ ಪಡೆಯಲು ಮುಖ್ಯಮಂತ್ರಿಗಳನ್ನು ಭೇಟಿ ಮಾಡಿಸುವ ಬಗ್ಗೆ ಸಹಾಯ ಕೋರಿದರು. ಶ್ರೀ ಚಂದ್ರು ಪ್ರತಿಷ್ಠಾನದ ಎಲ್ಲಾ ವಿಭಾಗಗಳನ್ನು ವೀಕ್ಷಿಸಿ, ಕಾರ್ಯಚಟುವಟಿಕೆಗಳ ಬಗ್ಗೆ ಸಂತೋಷ ವ್ಯಕ್ತಪಡಿಸಿ ಗ್ರಂಥಾಲಯಕ್ಕೆ ಹೊಸ ಕಪಾಟುಗಳನ್ನು ಕೊಳ್ಳಲು ೫ ಲಕ್ಷ ಹಣ ನೀಡುವ ಆಶ್ವಾಸನೆ ನೀಡಿದುದಲ್ಲದೆ, ಶೀಘ್ರವೇ ಮುಖ್ಯಮಂತ್ರಿಗಳ ಭೇಟಿಗೆ ದಿನವನ್ನು ನಿಗಧಿಪಡಿಸುವ ಆಶ್ವಾಸನೆಯನ್ನೂ ನೀಡಿದರು. ಡಾ. ನಾ. ಗೀತಾಚಾರ್ಯ ಕಾರ್ಯಕಾರಿ ಸಮಿತಿಯ ಪರವಾಗಿ ಅವರಿಗೆ ಅಭಿನಂದನೆ ಸಲ್ಲಿಸಿದರು.



೨೬-೦೬-೦೯ ಪಿ.ಕೆ. ನಾಗರಾಜರಾವ್ ದತ್ತಿನಿಧಿ ಕಾರ್ಯಕ್ರಮದ ಉದ್ಘಾಟನೆ

**ಸಿ.ಕೆ. ನಾಗರಾಜರಾವ್ ಅವರ ದತ್ತಿ ನಿಧಿ ಕಾರ್ಯಕ್ರಮ :** ಅಂದು ಂಜೆ ನಡೆದ ಸಿ.ಕೆ. ನಾಗರಾಜ್‌ರಾವ್ ದತ್ತಿನಿಧಿ ಕಾರ್ಯಕ್ರಮವನ್ನು ಮುಖ್ಯಮಂತ್ರಿ ಚಂದ್ರು ಉದ್ಘಾಟಿಸಿ ಶ್ರೀ ಸಿ.ಕೆ. ನಾಗರಾಜರಾಯರ ಾಹಿತ್ಯಿಕ ಹಾಗೂ ಇತರೆ ಚಟುವಟಿಕೆಗಳ ಬಗ್ಗೆ ಅವರನ್ನು ಪ್ರಶಂಸಿದರು. ಾ. ಎಸ್.ಹೆಚ್. ಭುವನೇಶ್ವರ್ ಅವರು ತುರಾಸು ಅವರ ಐತಿಹಾಸಿಕ ಾದಂಬರಿಗಳ ಬಗ್ಗೆ ಪ್ರಬಂಧ ಮಂಡಿಸಿ, 'ಪಟ್ಟಮಹಾದೇವಿ ಶಾನ್ತಲಾ' ಂತಹ ವಿಶಿಷ್ಟಕಾದಂಬರಿ ರಚಿಸಿರುವ ಸಿ.ಕೆ. ನಾಗರಾಜರನ್ನು ಸ್ಮರಿಸಿಕೊಂಡು ಅಭಿನಂದನೆ ಸಹ ಸಲ್ಲಿಸಿದರು. ನಾಡೋಜ ಜಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಡಾ.ನಾ. ಗೀತಾಚಾರ್ಯರು ವಂದನಾರ್ಪಣೆ ಮಾಡಿದರು.

**ದಿನಾಂಕ: ೦೮-೦೮-೨೦೦೯ರಂದು ಬಿ.ಎಂ.ಶ್ರೀ ಪ್ರತಿಷ್ಠಾನ :** ವಿಜಯನಗರ ಬೆಂಗಳೂರು-೪೦, ಅಲ್ಲಿರುವ 'ಅನುಭವ' ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ 'ಇಂದಿನ ಕನ್ನಡ : ರಚನೆ ಮತ್ತು ಬಳಕೆ' ಪುಸ್ತಕ ಬಿಡುಗಡೆ ಸಂದರ್ಭದಲ್ಲಿ ಒಂದು ಸಂವಾದ ಗೋಷ್ಠಿಯನ್ನು ಏರ್ಪಡಿಸಿತ್ತು. ಪ್ರೊ. ಕೆ. ಮರುಳ ಸಿದ್ದಪ್ಪ ಅಧ್ಯಕ್ಷತೆ ವಹಿಸಿದ್ದರು. 'ಕನ್ನಡ ಭಾಷೆಯ ಆತಂಕಗಳು' ವಿಷಯದ ಬಗ್ಗೆ ಶ್ರೀ ಎಸ್.ಎನ್. ಶ್ರೀಧರ್ ಉಪನ್ಯಾಸ ನೀಡಿದರು. ಸಂವಾದಗೋಷ್ಠಿಯಲ್ಲಿ ಡಾ. ಕೆ.ವಿ. ನಾರಾಯಣ, ಪ್ರೊ. ಕಿ.ರಂ. ನಾಗರಾಜ್, ಶ್ರೀಮತಿ ಎಂ.ಎಸ್. ಆಶಾದೇವಿ; ಶ್ರೀ ನಟರಾಜ ಬೂದಾಳು ಭಾಗವಹಿಸಿದ್ದರು.

**ದಿನಾಂಕ: ೧೬-೦೮-೨೦೦೯ ರಾಘವ ಪ್ರಕಾಶನ :** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ 'ಗಾಂಧೀಜಿ, ನಮನ' (ರಚನೆ : ರಾಘವ) 'ಭಯದ ನೆರಳು' - ಎಂ.ಎಸ್. ಭಾಸ್ಕರ್ ರಚನೆ. ಶ್ರೀ ಎಂ.ಎಸ್. ಭಾಸ್ಕರ್ ಅವರ ಈ ಗ್ರಂಥವನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಬಿಡುಗಡೆಗೊಳಿಸಿದರು. ಶ್ರೀ ಎಚ್.ಎಸ್. ದೊರೆಸ್ವಾಮಿ ಅಧ್ಯಕ್ಷತೆವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರೊ. ಕಿ.ರಂ. ನಾಗರಾಜ ಗ್ರಂಥಗಳ ಬಗ್ಗೆ ಮಾತನಾಡಿದರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಭಾಸ್ಕರ್ ಅವರ ಸಹೋದರ ಶ್ರೀ ರಾಮಪ್ರಸಾದ್ ವಂದನಾರ್ಪಣೆ ಮಾಡಿದರು.

■

## ಪ್ರೊ. ಎಂ.ವಿ.ಸೀತಾರಾಮಯ್ಯ ಅವರ ಜನ್ಮಶತಮಾನೋತ್ಸವ ಆಚರಣೆಯ ಪ್ರಾರಂಭೋತ್ಸವ

*(೧ನೇ ಪುಟದಿಂದ)*



ಯಶಸ್ಸಿಗೆ ಎಲ್ಲರೂ ಸಹಕರಿಸಬೇಕೆಂದು ಕೋರಿದರು. ಖ್ಯಾತ ಸಂಶೋಧಕ, ವಿದ್ವಾಂಸ, ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಗಳು, ಡಾ. ನಾ. ಗೀತಾಚಾರ್ಯರು ರಚಿಸಿರುವ 'ಹಸ್ತಪ್ರತಿ ಅಧ್ಯಯನ ಶಾಸ್ತ್ರ' ಹಾಗೂ ಶ್ರೀ ಎಸ್.ವಿ. ಶ್ರೀನಿವಾಸರಾವ್ ಈ ವಿಶೇಷ ಸಂದರ್ಭಕ್ಕೆಂದೇ ಸಿದ್ಧಪಡಿಸಿರುವ 'ಎಂ.ವಿ.ಸೀತಾರಾಮಯ್ಯ - ಕಿರು ಪರಿಚಯ - ನುಡಿಮುತ್ತುಗಳು' ಪುಸ್ತಕಗಳನ್ನು ಲೋಕಾರ್ಪಣೆಗೊಳಿಸಿ ಅವುಗಳಲ್ಲಿನ ವೈಶಿಷ್ಟ್ಯವನ್ನು ವಿವರಿಸಿದರು. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕ ಶ್ರೀ ಮನುಬಳಿಗಾರ್ ಅವರು ಎಂ.ವಿ.ಸೀ. ಅವರು ರಚಿಸಿರುವ ಗ್ರಂಥಗಳು, ಚಿತ್ರಗಳು ಹಾಗೂ ಹಸ್ತಪ್ರತಿ ಪ್ರದರ್ಶನಗಳ ಉದ್ಘಾಟನೆಯನ್ನು ನೆರವೇರಿಸಿ ಎಂ.ವಿ.ಸೀ. ಅವರ ಶತಮಾನೋತ್ಸವ ಆಚರಣೆಗೆ ನಿರ್ದೇಶನಾಲಯ ಪೂರ್ಣ ಸಹಕಾರ/ಸಹಯೋಗ ನೀಡುವುದಾಗಿ, ಹಾಗೆಯೇ ಪ್ರಸ್ತುತ ಪ್ರತಿಷ್ಠಾನಕ್ಕೆ ನೀಡುತ್ತಿರುವ ಅನುದಾನ ೫ಲಕ್ಷ ರೂಪಾಯಿಯನ್ನು ೧೦ ಲಕ್ಷಕ್ಕೆ ಏರಿಸುವ ಆಶ್ವಾಸನೆ ಸಹ ನೀಡಿ ಸರ್ವರ ಮೆಚ್ಚುಗೆಯ ಕರನಾಡನಕ್ಕೆ ಕಾರಣರಾದರು. ಎಂ.ವಿ.ಸೀ. ಅವರ ಸಮಗ್ರ ಸಾಹಿತ್ಯ ಕೃತಿಗಳನ್ನು ನಿರ್ದೇಶನದ ವತಿಯಿಂದ ಪ್ರಕಟಿಸುವುದಾಗಿಯೂ ಘೋಷಿಸಿದರು. ಎಂ.ವಿ.ಸೀ. ಬದುಕು-ಬರಹ ಕುರಿತು ನಾಡಿನ ಖ್ಯಾತ ಕವಿ ಹಾಗೂ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಡಾ. ದೊಡ್ಡರಂಗೇಗೌಡರು ಆತ್ಮೀಯವಾಗಿ ಮಾತನಾಡಿ ಗುರುಗಳಿಗೆ ನುಡಿ-ನಮನ ಸಲ್ಲಿಸಿದರು. ಹಾಗೆಯೇ ಶತಮಾನೋತ್ಸವ ಆಚರಣೆಗೆ ಶಾಸಕರ ನಿಧಿಯಿಂದ ೨ಲಕ್ಷ ರೂ. ಕೊಡುವುದಾಗಿ ಘೋಷಿಸಿದರು.

ಡಾ. ನಾ. ಗೀತಾಚಾರ್ಯರವರು ವಂದನಾರ್ಪಣೆ ಮಾಡಿದರು. ಶ್ರೀ ಎಸ್.ವಿ. ಶ್ರೀನಿವಾಸರಾಯರು ಸಮಿತಿಯ ಪರವಾಗಿ ಎಲ್ಲಾ ಅತಿಥಿಗಳಿಗೆ ಈ ಸಂದರ್ಭಕ್ಕೆಂದೇ ವಿಶೇಷವಾಗಿ ರೂಪಿಸಿದ್ದ ನೆನಪಿನ ಕಾಣಿಕೆಯನ್ನು ನೀಡಿದರು.

ಈ ಎಲ್ಲಾ ವೇದಿಕೆಯ ಕಾರ್ಯಕ್ರಮಗಳು ಮುಗಿದ ನಂತರ ಎಂ.ವಿ.ಸೀ. ಅವರ ಮಕ್ಕಳ ನಾಟಕ 'ಕುಮಾರಗೌತಮ'ವನ್ನು 'ಬೆಳಕು ಶಿಶು ನಿವಾಸ'ದ ಮಕ್ಕಳಿಂದ ಪ್ರದರ್ಶಿತಗೊಂಡು ಸರ್ವರ ಅಪಾರ ಮೆಚ್ಚುಗೆಗೆ ಪಾತ್ರವಾಯಿತು. ಇದನ್ನು ಖ್ಯಾತರಂಗಕರ್ಮಿ ಶ್ರೀ ಜಿ.ಕೆ. ಅನಂತ್ ನಿರ್ದೇಶಿಸಿದ್ದರು, ಮಕ್ಕಳುಗಳ ಪರವಾಗಿ ಬೆಳಕು ಶಿಶು ನಿವಾಸದ ನಿರ್ದೇಶಕ ಶ್ರೀ ಮೋಹನದಾಸ್ ಧಾವಸ್ಕರ್ ಅವರು ಡಾ. ಪಿ.ವಿ. ನಾರಾಯಣವರವರಿಂದ ನೆನಪಿನ ಕಾಣಿಕೆ ಸ್ವೀಕರಿಸಿದರು. ಕಾರ್ಯಕ್ರಮಗಳ ನಿರೂಪಣೆಯನ್ನು ಡಾ. ನಾ. ಗೀತಾಚಾರ್ಯ ಹಾಗೂ ಶ್ರೀ ಎಸ್.ವಿ. ಶ್ರೀನಿವಾಸರಾವ್ ನಡೆಸಿಕೊಟ್ಟರು.

ನಾಟಕದ ಪ್ರಾಯೋಜಕರು: ಕರ್ನಾಟಕ ನಾಟಕ ಅಕಾಡೆಮಿ

■



# ಪುಸ್ತಕ ಪರಿಚಯ




(೧) ಶ್ರೀ ಸಾಹಿತ್ಯ ಮಣಿಮಾಲೆ : ಸಂ. ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ, ಪ್ರಕಾಶಕರು : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯ ಪ್ರಥಮ ಮುದ್ರಣ : ೨೦೦೮. (ಪುಟಗಳು ೨೪೬, ಬೆಲೆ : ರೂ. ೧೫೦/–) ಬಿ.ಎಂ.ಶ್ರೀ ಅವರ ೧೨೫ನೇ ಜನ್ಮ ದಿನಾಚರಣೆ ಸಂದರ್ಭ ದಲ್ಲಿ ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀಗಳು ಬಹಳ ಶ್ರಮವಹಿಸಿ, ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ್ದ 'ಶ್ರೀಸಾಹಿತ್ಯ' ಸಂಪುಟದಲ್ಲಿ ಸಂಕಲಿತವಾಗಿದೆ. ಬಿಟ್ಟುಹೋಗಿದ್ದ ಹಲವಾರು, ಭಾಷಣಗಳು, 'ಕನ್ನಡನುಡಿ', ಸಂಪಾದಕೀಯ, ಲೇಖನಗಳು, ಅಭಿನಂದನೆ, ಬಿನ್ನವತ್ತಳೆ ಮುನ್ನುಡಿ, ಸಂದೇಶಗಳು ಮುಂತಾದವನ್ನು ಸಂಗ್ರಹಿಸಿ ಈ ಕೃತಿಯಲ್ಲಿ ನೀಡಿರುತ್ತಾರೆ. ಇದು ಸಂಗ್ರಹ ಯೋಗ್ಯ ಕೃತಿ. ಬಿ.ಎಂ.ಶ್ರೀ ಅವರ ವೈವಿಧ್ಯಮಯ ಪ್ರತಿಭೆಯನ್ನು ಇದು ದರ್ಶಿಸುತ್ತದೆ.

(೨) ಶ್ರೀ ಮಹಾಭಾರತ (ಭಾಗ–೩) ಲೇಖಕರು: ಡಾ. ನಿರುಪಮಾ, ಪ್ರಕಟಣೆ: ವಸಂತಪ್ರಕಾಶನ ೩೬೦, ೧೦ 'ಬಿ' ಮೈನ್, ಜಯನಗರ ೩ನೇ ಬ್ಲಾಕ್, ಬೆಂಗಳೂರು–೧೧. ಪುಟಗಳು: ix + ೪೬೭, ಬೆಲೆ : ರೂ. ೨೫೦/– ಮಹಾ ಭಾರತದ ದೀರ್ಘಘಟನಾವಳಿಗಳನ್ನು ಡಾ. ನಿರುಪಮಾ ಅವರು ೩ ಸಂಪುಟ ಗಳಲ್ಲಿ ನೀಡಲು ಶ್ರಮಿಸಿದ್ದಾರೆ. ಈ ೩ನೇ ಸಂಪುಟದಲ್ಲಿ ಕುರುಕ್ಷೇತ್ರ, ಸೌಪ್ತಿಕ, ಸ್ತ್ರೀ; ಶಾಂತಿ; ಅನುಶಾಸನಿಕ ಅಶ್ವಮೇಧ, ಆಶ್ರಮವಾಸ, ಮೌಸಲ, ಮಹಾಪ್ರಸ್ಥಾನ, ಸ್ವರ್ಗಾರೋಹಣ ಪರ್ವಗಳಿಗೆ. 'ಪಂಚಮವೇದ' ವೆಂದು ಖ್ಯಾತವಾಗಿರುವ ಮಹಾಭಾರತದ ಕಥೆಯನ್ನು ಸವಿಸ್ತಾರವಾಗಿ ಗದ್ಯಮಾಧ್ಯಮದಲ್ಲಿ ಸರ್ವರಿಗೂ ಇಷ್ಟವಾಗುವಂತಹ ಶೈಲಿಯಲ್ಲಿ ನಿರೂಪಿಸಿದ್ದಾರೆ. ಲೇಖಕಿ ಯವರ ಅಪಾರಶ್ರದ್ಧೆ, ರಚನಾ ಚಾತುರ್ಯ ಗ್ರಂಥದುದ್ದಕ್ಕೂ ಮೆರೆದಿದೆ.

(೩) ಕನ್ನಡದ ಕೀರ್ತಿವಂತ ಸಾಹಿತಿಗಳು : (೧–೨ ಭಾಗ) ಲೇಖಕರು, ಎಸ್.ವಿ. ಶ್ರೀನಿವಾಸರಾವ್ ಪ್ರಕಾಶಕರು : ವಸಂತ ಪ್ರಕಾಶನ, ೩೬೦. ೧೦ನೇ 'ಬಿ' ಮೇನ್, ಜಯನಗರ ೩ನೇ ಬ್ಲಾಕ್, ಬೆಂಗಳೂರು –೧೧, ಪುಟಗಳು (ಭಾಗ –೧) ೧೨೦, (ಭಾಗ–೨) ಮುದ್ರಣ: ೨೦೦೮, ಬೆಲೆ: ರೂ.೪೦/–ಕನ್ನಡದ ಕೀರ್ತಿವಂತ ೧೯ಜನ ಸಾಹಿತಿಗಳ ಕಿರುಚಿತ್ರಣವನ್ನು ಭಾಗ–೧ರಲ್ಲೂ ೧೫ ಜನರ ಕಿರುಚಿತ್ರಣವನ್ನು ಭಾಗ–೨ರಲ್ಲೂ ಲೇಖಕರು ವಸಂತ ಪ್ರಕಾಶನದ 'ಬಾಲ ಸಾಹಿತ್ಯ ಮಾಲೆ' ಯಡಿ ನೀಡಿರುತ್ತಾರೆ. ಈ ವ್ಯಕ್ತಿ ಚಿತ್ರಣಗಳು ಮಕ್ಕಳನ್ನೇ ದೃಷ್ಟಿಯಲ್ಲಿರಿಸಿಕೊಂಡು ರಚಿಸಿದ್ದರೂ ಸಾಹಿತ್ಯಾಸಕ್ತರೆಲ್ಲರಿಗೂ ಪ್ರಿಯ ವಾಗುವುದರಲ್ಲಿ ಸಂದೇಹವಿಲ್ಲ, ಉಲ್ಲೇಖಿತ ಎಲ್ಲಾ ಪ್ರಾತಃಸ್ಮರಣೀಯರ ಬದುಕು–ಬರಹದ ಸಂಕ್ಷಿಪ್ತ ವಿವರಗಳು ಕೂಲಂಕಷವಾಗಿ ಅರಿಯುವ ಸಾಹಿತ್ಯಾಭಿಮಾನಿಗಳ ಕುತೂಹಲ ಉದ್ದೀಪನಗೊಳಿಸುವಲ್ಲಿ ಯಶಸ್ವಿಯಾಗಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.







(೪) ಕ.ವೆಂ. ರಾಘವಾಚಾರ್ – ಜೀವನ –ಸಾಧನೆ (ಶತಮಾನೋತ್ಸವ ವಿಚಾರಗೋಷ್ಠಿ ಲೇಖನಗಳು) ಸಂಪಾದಕರು : ಡಾ. ನಾ.ಗೀತಾಚಾರ್ಯ ಮತ್ತು ಶ್ರೀ ಎಸ್.ವಿ. ಶ್ರೀನಿವಾಸರಾವ್, ಪ್ರಕಾಶಕರು : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು–೫೬೦೦೧೯. ಪುಟಗಳು: x + ೧೨೫, ಪ್ರಕಟಣೆ: ೨೦೦೮, ಬೆಲೆ : ರೂ. ೮೦/–. ಪ್ರಸ್ತುತ ಗ್ರಂಥ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸಹಯೋಗದಲ್ಲಿ ೧೯–೦೮–೨೦೦೬ರಂದು ನಡೆಸಿದ ಕ. ವೆಂ. ರಾಘವಾಚಾರ್ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ನಡೆಸಿದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳ ಮತ್ತು ಭಾಷಣಗಳ ಸಂಕಲನ. ರಾಘವಾಚಾರ್ಯರು ಮೂಲ ಗ್ರೀಕ್‌ನಿಂದ ನೇರವಾಗಿ ಅನುವಾದಿಸಿದ ಅಪರೂಪದ ಶ್ರೇಷ್ಠ ವಿದ್ವಾಂಸರು. ಈ ಕೃತಿಯನ್ನು ಪ್ರೊ. ಜಿ. ವೆಂಕಟಸುಬ್ಬಯ್ಯ, ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ, ಪ್ರಧಾನ ಗುರುದತ್, ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ, ಪ್ರೊ. ಕೆ. ಎಂ. ಸೀತಾರಾಮಯ್ಯ, ಡಾ. ಸಾ.ಶಿ. ಮರುಳಯ್ಯ; ಪ್ರೊ. ಸಿ. ಎನ್. ರಾಮಚಂದ್ರನ್; ಡಾ. ಕೆ.ಪಿ. ಭಟ್; ಡಾ. ನಾ. ಗೀತಾಚಾರ್ಯ ಶ್ರೀ ಜಿ.ಟಿ. ನಾರಾಯಣರಾವ್ ಅವರು ಮಂಡಿಸಿದ ಪ್ರಬಂಧಗಳಿವೆ. ಇದು ಸಂಗ್ರಹಯೋಗ್ಯ ಕೃತಿ ಎಂಬುದರಲ್ಲಿ ಸಂದೇಹವಿಲ್ಲ. ಎಲ್ಲಾ ಕಾಲೇಜು, ಗ್ರಂಥಭಂಡಾರ, ಸಾರ್ವಜನಿಕ ಗ್ರಂಥಾಲಯಗಳು ಹಾಗೂ ಶಾಲೆಗಳ ಗ್ರಂಥಾಲಯದಲ್ಲಿ ಇದು ಇರಲೇಬೇಕಾದ ಕೃತಿ. ಎಲ್ಲಾ ಸಾಹಿತ್ಯಪ್ರಿಯರಿಗೂ ಪ್ರಿಯ ವಾಗುವ ಕೃತಿಯೂ ಹೌದು. ■



## ಸಾದರಸ್ವೀಕಾರ

**ಪುಸ್ತಕದ ಹೆಸರು ಪ್ರಕಾಶಕರ ಹೆಸರು ಮತ್ತು ವಿಳಾಸ**

**ದೀಪ** : ಶ್ರೀ ಟಿ.ವಿ. ವೆಂಕಟರಮಣಯ್ಯ, ಬೆಂಗಳೂರು, ವಿಶ್ವವಿದ್ಯಾಲಯ, ಪ್ರಕಟಣೆ : 2009 ಪುಟ : ,ಬೆಲೆ : 32/–

**ನಮ್ಮ ಗೋವು** : ಶ್ರೀ ಟಿ.ವಿ. ವೆಂಕಟರಮಣಯ್ಯ, ಬೆಂಗಳೂರು ವಿಶ್ವವಿದ್ಯಾಲಯ, ಪ್ರಕಟಣೆ : 2009, ಪುಟ : ಬೆಲೆ : 32/–

**ಜಗದ ಬಾಳೇ ತೋಟ** : ಶ್ರೀ ಜಿ.ಎಸ್. ಸತ್ಯಮೂರ್ತಿ,ಕಿಶೋರಿ ಪ್ರಕಾಶನ, ಪ್ರಕಟಣೆ : 2009, ಪುಟ : 44, ಬೆಲೆ – 30/–

**ನುಡಿಹಾರ – 1**, ಸಂಪಾದಕರು : ಡಾ॥ ನಾ. ಮೊಗಸಾಲೆ, ಕಾಂತಾವರ ಕನ್ನಡ ಸಂಘ, ವರ್ಷ:2009, ಪುಟ : 180, ಬೆಲೆ : 120–

**ನೂರೈದರ ಧೀಮಂತ ಬಾಪುರಾಮಣ್ಣ** : ಮುಳಿಯ ರಾಘವಯ್ಯ, 'ಬಾಪೂ' ಕುಟುಂಬದ ಪ್ರಕಟಣೆ, ವರ್ಷ : 2008, ಪುಟ : 134 ಬೆಲೆ :

**ಭಾರತೀಯ ಸಂಗೀತ ವಾದ್ಯಗಳು** : ಲೇಖಕ : ಗಾನಕಲಾ ಭೂಷಣ ಎಲ್. ರಾಜಾರಾವ್, ಪ್ರಕಟಣೆ : ಗಾನಕಲಾ ಭೂಷಣ ವೀಣೆ, ಎಲ್. ರಾಜಾರಾವ್ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ವರ್ಷ : 2009, ಪುಟ : 86, ಬೆಲೆ : 75/–

**ವೈಣಿಕ ವಿದ್ವಾನ್ ಎಲ್. ರಾಜಾರಾವ್** : ಲೇಖಕ : ಎಂ.ವಿ. ಸೀತಾರಾಮಯ್ಯ, ಪ್ರಕಟಣೆ : ಸ್ವಪ್ನ ಬುಕ್ ಹೌಸ್, ವರ್ಷ : 2009, ಪುಟ : 60, ಬೆಲೆ : 22/–

**ಭೈರವಿ ಲಕ್ಷ್ಮೀನಾರಣಪ್ಪ** : ಲೇಖಕ : ಗಾನಕಲಾ ಭೂಷಣ ಎಲ್.ರಾಜಾರಾವ್, ಪ್ರಕಟಣೆ : ಸ್ವಪ್ನಬುಕ್ ಹೌಸ್, ವರ್ಷ : 2009, ಪುಟ : 48, ಬೆಲೆ : 17/–

**ಮೈಸೂರು ಸದಾಶಿವರಾಯರು** : ಲೇಖಕ : ಗಾನಕಲಾ ಭೂಷಣ ಎಲ್. ರಾಜಾರಾವ್, ಪ್ರಕಟಣೆ : ಸ್ವಪ್ನ ಬುಕ್ ಹೌಸ್, ವರ್ಷ : 2009, ಪುಟ : 44, ಬೆಲೆ : 16/–

## ಅಭಿನಂದನೆಗಳು

- **'ಕುವೆಂಪು ಭಾಷಾ ಭಾರತಿ'** : ಡಾ. ಪ್ರಧಾನಗುರುದತ್‌ರವರನ್ನು 'ಕುವೆಂಪುಭಾಷಾಭಾರತಿ' ಯ ಅಧ್ಯಕ್ಷರನ್ನಾಗಿ ಸರಕಾರ ನೇಮಿಸಿ ಅವರಿಗೆ ಸಚಿವ ಸ್ಥಾನಮಾನ ಸಹ ನೀಡಿದೆ. (೨೪–೦೬–೨೦೦೯ ಪ್ರಜಾವಾಣಿ).
- **'ಅನುಪಮ ಪ್ರಶಸ್ತಿ'** : (೨೦೦೯) ಕರ್ನಾಟಕ ಲೇಖಕಿಯ ಸಂಘ ೩೦–೦೫–೦೯ರ ತನ್ನ ಪ್ರಕಟಣೆಯಲ್ಲಿ ಶ್ರೀಮತಿ ನೀಳಾದೇವಿ ಯವರಿಗೆ ನೀಡಿರುವುದಾಗಿ ತಿಳಿಸಿದೆ.
- **ಕೇಂದ್ರ ಸರ್ಕಾರದ ಸಂಪುಟ ದರ್ಜೆ ಸಚಿವಸ್ಥಾನ** : ನಾಡಿನ ಮಾಜಿ ಮುಖ್ಯಮಂತ್ರಿ ಹಾಗೂ ಖ್ಯಾತ ಸಾಹಿತಿಗಳಾದ ಶ್ರೀ ವೀರಪ್ಪ ಮೊಯಿಲಿಯವರನ್ನು ಕೇಂದ್ರ ಸರ್ಕಾರವು ಕಾನೂನು ಮಂತ್ರಿ ಯನ್ನಾಗಿ, ಮತ್ತೊಬ್ಬ ಮಾಜಿ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರನ್ನೂ ವಿದೇಶಾಂಗ ಸಚಿವರನ್ನಾಗಿ, ಸಂಸದ ಶ್ರೀ ಕೆ.ಎಚ್. ಮುನಿಯಪ್ಪ ಅವರನ್ನು' ರಾಜ್ಯ ಸಚಿವರನ್ನಾಗಿ ನೇಮಿಸಿದೆ (೨೨–೦೫–೨೦೦೯).
- **ಮಹಾ ಮಹೋಪ್ಯಾಧ್ಯಾಯ ಪ್ರಶಸ್ತಿ** : ವಿದ್ವಾನ್ ಕೆ.ಜಿ. ಸುಬ್ರಾಯಶರ್ಮ ಅವರಿಗೆ ಉತ್ತರ ಪ್ರದೇಶದ ಸರ್ಕಾರ ಈ ಪ್ರಶಸ್ತಿ ನೀಡಿ ಪುರಸ್ಕರಿಸಿದೆ (೨೦–೦೫–೨೦೦೯)
- **'ವೇದಾಂತ ಗಂಗಾಧರ ಪ್ರಶಸ್ತಿ'** : ಗಾಂಧಿ, ನೆಹರೂ ವಿಚಾರಮಂಚ್, ವಿದ್ವಾನ್ ಕೆ.ಜಿ. ಸುಬ್ರಾಯಶರ್ಮರಿಗೆ ಈ ಪ್ರಶಸ್ತಿ ನೀಡಿ ಗೌರವಿಸಿದೆ.
- **'ಚಿದಾನಂದ ಪ್ರಶಸ್ತಿ'** : (೨೦೦೯) ಡಾ. ವೀರಣ್ಣ ಬಿ. ರಾಜೂರ ಅವರಿಗೆ ಈ ಪ್ರಶಸ್ತಿ ಸಂದಿದೆ.
- **ಆರ್ಯಭಟ ಅಂತಾರಾಷ್ಟ್ರೀಯ ಪ್ರಶಸ್ತಿ** : (೨೦೦೮) ಶ್ರೀ ಎಸ್.ವಿ. ಶ್ರೀನಿವಾಸರಾವ್, ಡಾ. ಜಿ. ನಾರಾಯಣ ಮತ್ತು ಜಯಂತ ಕಾಯ್ಕಿಣಿ ಅವರಿಗೆ ಲಭಿಸಿದೆ.
- **ಮಾಸ್ತಿ ಪ್ರಶಸ್ತಿ** : (೨೦೦೯) ಪ್ರೊ.ಎಂ.ಎಚ್. ಕೃಷ್ಣಯ್ಯ ಅವರಿಗೆ ಲಭಿಸಿದೆ.
- **ಚಾವುಂಡರಾಯ ಪ್ರಶಸ್ತಿ** : (೨೦೦೯) ವಿದ್ವಾಂಸ ಡಾ. ಹೋ. ಶ್ರೀಮದನಕೇಸರಿಯವರಿಗೆ ಲಭಿಸಿದೆ.
- **ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ** : (೨೦೦೮) ಹಿರಿಯ ಸಾಹಿತಿ ಪ್ರೊ. ಅ.ರಾ. ಮಿತ್ರ, ಹಸನಬಿ ಬೀಳಗಿ, ಡಾ. ವಿಷ್ಣುನಾಯ್ಕ; ಪ್ರೊ. ಮಲ್ಲಿಕಾರ್ಜುನ ಹಿರೇಮಠ ಮತ್ತು ಲಕ್ಷ್ಮಣ್ ಅವರಿಗೆ ಸಂದಿದೆ.
- **ರಾಷ್ಟ್ರೀಯಚಲನಚಿತ್ರ ಪ್ರಶಸ್ತಿ** : (೨೦೦೮) ನಟ ಉಮಾಶ್ರೀ (ಚಿತ್ರ : ಗುಲಾಬಿ ಟಾಕೀಸ್) 'ಶ್ರೇಷ್ಠನಟಿ ಪ್ರಶಸ್ತಿ', ನಟ ಶ್ರೀ ಪ್ರಕಾಶ್‌ರೈಗೆ 'ಶ್ರೇಷ್ಠ ನಟ ಪ್ರಶಸ್ತಿ' ಸಂದಿವೆ. (ತೆಲುಗು ಚಿತ್ರ 'ಕಾಂಜೀವರಂ')

*ಮೇಲ್ಕಂಡ ಎಲ್ಲಾ ಸನ್ಮಾನ್ಯರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತದೆ.*

## ಶ್ರದ್ಧಾಂಜಲಿ

(೧) ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ಶ್ರೀ ಬಿ.ಎಂ. ಇದಿನಬ್ಬ (೯೬) ಅವರು' : ೧೧-೦೪-೨೦೦೯ರಂದು ನಿಧನರಾದರು. ಅವರ ಜೀವಿತಕಾಲ (೧೯-೦೯-೧೯೨೦-೧೧-೦೪-೨೦೦೯) ಉಪಾಧ್ಯಾಯರಾಗಿದ್ದು ಇವರು ಕಥೆಗಾರರಾಗಿ, ಕವಿಯಾಗಿ ಖ್ಯಾತರಾಗಿದ್ದುದಲ್ಲದೆ ರಾಜಕೀಯ ಕ್ಷೇತ್ರದಲ್ಲಿ ವಿಧಾನ ಪರಿಷತ್ತಿನ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದರು. ಇವರ ಮುಖ್ಯ ಕೃತಿಗಳು ಬಾಳಿನಚಿತ್ರಗಳು; ಹರಿದಕೋಟು; ಹೃದಯಗೀತೆಗಳು; ಜೇನುಗೂಡು; ವೀರಗೀತೆಗಳು ಮತ್ತು ಕಿಡಿಗಳು.

(೨) ದೇಶ ಕುಲಕರ್ಣಿ : (೭೧) ಕನ್ನಡಗದ್ಯ ಲೇಖಕರಲ್ಲಿ ಪ್ರಮುಖರಾಗಿದ್ದ ಖ್ಯಾತ ಕವಿ, ಕಥೆಗಾರ, ವಿಮರ್ಶಕ ದೇಶಕುಲಕರ್ಣಿ (ನಿಜನಾಮ : ಡಿ.ಎಲ್. ಉಪೇಂದ್ರನಾಥ್) ಅವರು ೨೨-೦೪-೨೦೦೯ ರಂದು ಬೆಂಗಳೂರಿನಲ್ಲಿ ನಿಧನರಾದರು. (ಜೀವಿತ ಕಾಲ : ೨೫-೦೨-೧೯೩೮-೨೨-೦೪-೨೦೦೯)

ಇವರು ವೃತ್ತಿಯಲ್ಲಿ ಕೇಂದ್ರ ಸರಕಾರದಲ್ಲಿ ಅಧಿಕಾರಿಯಾಗಿದ್ದರು. ಪ್ರವೃತ್ತಿಯಲ್ಲಿ, ಸಾಹಿತಿಯಾಗಿದ್ದರು. ಇವರು ರಚಿಸಿರುವ ಮುಖ್ಯ ಕೃತಿಗಳು : ಋತು ಸಂಹಾರ; ಕೊ[illegible]. ನೆಪವಿಲ್ಲದ ಪ್ರೀತಿ; ಕೊಂಪೆಯಲ್ಲಿ ಕೋಗಿಲೆ; ಸೋಲ್ಪೋ (ಸಣ್ಣಕಥೆ); ಪಾರಪತ್ಯೆ (ನಾಟಕ), ನಿರೀಕ್ಷೆ, ಸಹಜ, ಪಂಪಾಯಾತ್ರೆ , ಕೂಡಿಕೊಂಡ ಸಾಲು ಮುಂತಾದವು.

(೩) ಮುಳ್ಳೂರು ನಾಗರಾಜು : (೫೫) ದಲಿತ ಕವಿ ಮುಳ್ಳೂರು ನಾಗರಾಜ್ ಅವರು ಮೈಸೂರಿನಲ್ಲಿ ನಿಧನರಾದರು. ಅಸ್ಪೃಶ್ಯತೆ ವಿರುದ್ಧ ಇವರು ಚಳವಳಿ ನಡೆಸಿದ್ದರು.

(೪) ಆರ್.ವಿ. ಭಂಡಾರಿ : (೭೨) ಹಿರಿಯ ಸಾಹಿತಿ, ಹಾಗೂ ನಿವೃತ್ತ ಶಿಕ್ಷಕ, ಇವರು ಮಣಿಪಾಲದಲ್ಲಿ ಇತ್ತೀಚೆಗೆ ನಿಧನರಾದರು. ಸಾಹಿತ್ಯಕ್ಷೇತ್ರದಲ್ಲಿ ಭಂಡಾಯ ಸಾಹಿತಿ ಎಂದೇ ಚಿರಪರಿಚಿತರಾಗಿದ್ದರು. ಇವರ ಪ್ರಮುಖ ಕೃತಿಗಳು : ಕಣ್ಣೀಕಟ್ಟೆ ಕಾಡೆಗೂಡೆ (ಕವನ ಸಂಕಲನ), ಬೆಂಕಿಯ ಮಧ್ಯೆ, ಬಿರುಗಾಳಿ; ಯಶೋವಂತನ ಯಶೋಗೀತೆ (ಕಾದಂಬರಿಗಳು) ಯಾನ, ಬೆಳಕಿನೆಡೆಗೆ (ಮಕ್ಕಳ ನಾಟಕಗಳು), ಸಾಹಿತ್ಯ ಅಕಾಡೆಮಿಯ ಬಹುಮಾನ ಇವರ 'ಯಶವಂತನ ಯಶೋಗಾನ'ಕ್ಕೆ ಲಭಿಸಿದೆ. ಇವರ ಜೀವಿತ ಕಾಲ (೦೫-೦೫-೧೯೩೬ - ೨೫-೧೦-೨೦೦೮).

*ಮೇಲ್ಕಂಡ ಎಲ್ಲಾ ದಿವಂಗತಗಳಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಗೌರವಪೂರ್ವಕವಾಗಿ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ*

## ದಾನಿಗಳು

೧.ದತ್ತಿನಿಧಿ :

| | | |
|---|---|---|
| ೧) | ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸಾರಂಗಿ ವೆಂಕಟರಾಮಯ್ಯ -ಪುಟ್ಟಚ್ಚಮ್ಮ ದತ್ತಿ | ೨೫,೦೦೦-೦೦ |

೨. ಎಂ.ವಿ.ಸೀ. ಶತಮಾನೋತ್ಸವ ನಿಧಿ :

| | | |
|---|---|---|
| ೧) | ಶ್ರೀ ಮೋಹನ್‌ದಾಸ್ ಧಾವಸ್ಕರ್, ಬೆಂಗಳೂರು | ೨,೦೦೧-೦೦ |
| ೨) | ಶ್ರೀ ಕೆ.ಎನ್. ಭಗವಾನ್, ಬೆಂಗಳೂರು | ೨,೦೦೦-೦೦ |
| ೩) | ಶ್ರೀ ಜಿ.ಕೃಷ್ಣಪ್ಪ, ಬೆಂಗಳೂರು | ೧,೦೦೦-೦೦ |
| ೪) | ಶ್ರೀ ಎಚ್.ಎಸ್. ದೊರೆಸ್ವಾಮಿ, ಬೆಂಗಳೂರು | ೫೦೦-೦೦ |
| ೫) | ಶ್ರೀ ಅ.ರಾ.ಮಿತ್ರ, ಬೆಂಗಳೂರು | ೨೦೦-೦೦ |
| ೬) | ಶ್ರೀ ಎಸ್.ಟಿ. ರಾಧಾಕೃಷ್ಣ, ಬೆಂಗಳೂರು | ೨೦೦-೦೦ |
| ೭) | ಶ್ರೀ. ಡಾ.ನಾ.ಗೀತಾಚಾರ್ಯ, ಬೆಂಗಳೂರು | ೨೦೦-೦೦ |
| ೮) | ಶ್ರೀ ಎನ್.ಕೆ. ಆನಂದ ಆಳ್ವಾರ್, ಬೆಂಗಳೂರು | ೧೦೧-೦೦ |
| ೯) | ಡಾ. ದೇ. ಜವರೇಗೌಡ | ೫೦೦-೦೦ |

೩. ಹಸ್ತಪ್ರತಿ ದಾನ :

| | | |
|---|---|---|
| ೧) | ಶ್ರೀ ಜಿ. ರಾಜಗೋಪಾಲ್, ಬೆಂಗಳೂರು | - ೧ ಕಟ್ಟು |
| ೨) | ಶ್ರೀ ವೈ.ಕೆ. ವೆಂಕಟೇಶ್‌ಮೂರ್ತಿ, ಬೆಂಗಳೂರು | -೧೮ ಓಲೆಗರಿ ಗ್ರಂಥ |

ಈ ಮೇಲ್ಕಂಡ ದಾನಿಗಳಿಗೆ ಪ್ರತಿಷ್ಠಾನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ತೆರೆದ-ಅಂಚೆ

ಅಚ್ಚಾದ ಪುಸ್ತಕ



ಶ್ರೀಮತಿ/ಶ್ರೀ..........

500.ಶ್ರೀ ಎಂ.ಎಸ್. ತಿರುಮಲಾಚಾರ್
ನಂ.99, ಪೋಸ್ಟಲ್ ಕಾಲೋನಿ,
1ನೇ ಹಂತ, 6ನೇ ಮುಖ್ಯರಸ್ತೆ,
ಸಂಜಯನಗರ,
ಬೆಂಗಳೂರು-560094

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೪೮೭೭

ಮುದ್ರಕರು : ಇಳಾ ಮುದ್ರಣ, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೨೬. ✆ : ೨೬೭೫೭೮೧೫೯
'ವಾರ್ತಾಪತ್ರ' ಪ್ರಾಯೋಜಕರು: ಇಳಾ ಮುದ್ರಣ, ಬೆಂಗಳೂರು-೨೬